## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 866 (846) |
| ಸದಸ್ಯರ ಹೆಸರು | : | ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 20-09-2021 |
| ಉತ್ತರಿಸುವವರು | : | ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯ ಹಲವಾರು ತೋಟಗಳಲ್ಲಿ ಕಾಡಾನೆಗಳು ಸಾಕಷ್ಟು ಬಾರಿ ಬೀಡು ಬಿಟ್ಟಿರುವುದರಿಂದ ರೈತರು ಹಾಗೂ ಕಾಫಿ ಬೆಳೆಗಾರರಿಗೆ ನಿರಂತರವಾಗಿ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ? | ಬಂದಿದೆ. |
| ಆ) | ಬಂದಿದ್ದಲ್ಲಿ, ಪ್ರಸ್ತುತ ವರ್ಷದಲ್ಲಿ ಇದುವರೆಗೆ ಎಷ್ಟು ಕಾಡಾನೆಗಳನ್ನು ಹಿಡಿಯಲಾಗಿದೆ ; | ಕೊಡಗು ಜಿಲ್ಲಾ ವ್ಯಾಪ್ತಿಯಲ್ಲಿ ಪ್ರಸ್ತುತ ವರ್ಷದಲ್ಲಿ ವಿರಾಜಪೇಟೆ ಪ್ರಾದೇಶಿಕ ವಿಭಾಗ ವ್ಯಾಪ್ತಿಯ ವಿರಾಜಪೇಟೆ ವಲಯದ ಅಮ್ಮತ್ತಿ ಹೋಬಳಿಯ ಹೊಸಕೋಟೆ ಗ್ರಾಮದಲ್ಲಿ ದಿನಾಂಕ 10.04.2021 ರಂದು ಒಂದು ಗಂಡಾನೆಯನ್ನು ಸೆರೆಹಿಡಿಯಲಾಗಿದೆ. |
| ಇ) | ಕಳೆದ 3 ವರ್ಷಗಳಲ್ಲಿ ಎಷ್ಟು ಕಾಡಾನೆಗಳನ್ನು ಹಿಡಿದು ಸುರಕ್ಷಿತ ಪ್ರದೇಶಕ್ಕೆ ಸ್ಥಳಾಂತರ ಮಾಡಲಾಗಿದೆ (ವರ್ಷವಾರು ಮಾಹಿತಿ ನೀಡುವುದು) | ಕಳೆದ ಮೂರು (3) ವರ್ಷಗಳಲ್ಲಿ ಕಾಡಾನೆಗಳನ್ನು ಹಿಡಿದು ಸ್ಥಳಾಂತರ ಮಾಡಿರುವ ವಿವರವನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಈ) | ಕಾಡಾನೆಗಳಿಂದ ನಿರಂತರವಾಗಿ ಕಾಫಿ ತೋಟಗಳು ಹಾಳಾಗುತ್ತಿರುವುದನ್ನು ತಪ್ಪಿಸಲು, ಸರ್ಕಾರವು ಯಾವ ಕ್ರಮಗಳನ್ನು ಕೈಗೊಂಡಿದೆ. | ಕೊಡಗು ಜಿಲ್ಲೆಯಲ್ಲಿ ಕಾಡಾನೆಗಳಿಂದ ನಿರಂತರವಾಗಿ ಕಾಫಿ ತೋಟಗಳು ಹಾಳಾಗುತ್ತಿರುವುದನ್ನು ತಪ್ಪಿಸಲು ಈ ಕೆಳಕಂಡ ಕಾಮಗಾರಿಗಳು ಹಮ್ಮಿಕೊಳ್ಳಲಾಗಿದೆ.<br>1. ಪ್ರಸಕ್ತ ಸಾಲಿನಲ್ಲಿ 51.37 ಕಿ.ಮೀ. ಸೋಲಾರ್ ತಂತಿಬೇಲಿ ನಿರ್ಮಾಣ ಕಾಮಗಾರಿ ಕೈಗೊಂಡಿದ್ದು ಕಾಮಗಾರಿಯು ಪ್ರಗತಿಯಲ್ಲಿದೆ.<br>2. ಅರಣ್ಯ ಅಂಚಿನ ಗ್ರಾಮಗಳಲ್ಲಿ ಆನೆಗಳು ಕಾಡಿನಿಂದ ನಾಡಿಗೆ ಬಾರದಂತೆ 45.41 ಕಿ.ಮೀ. ಆನೆತಡೆ ಕಂದಕ ನಿರ್ಮಾಣ ಕಾಮಗಾರಿ ಕೈಗೊಂಡಿದ್ದು ಕಾಮಗಾರಿಯು ಪ್ರಗತಿಯಲ್ಲಿದೆ. |

.....2

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | 3. ಅರಣ್ಯ ಅಂಚಿನ ಗ್ರಾಮಗಳಲ್ಲಿ ರೈತರಿಗೆ ಶೇ 50:50ರ ರಿಯಾಯಿತಿಯನ್ನು ಸೋಲಾರ್ ಬೇಲಿ ನಿರ್ಮಾಣವನ್ನು ಕೈಗೊಳ್ಳಲು ಅರಣ್ಯ ಇಲಾಖೆಯಿಂದ ಶೇ50ರಷ್ಟು ಧನ ಸಹಾಯ ನೀಡಲಾಗುತ್ತಿದ್ದು 2019-20ನೇ ಸಾಲಿನಲ್ಲಿ 4.754 ಕಿ.ಮೀ. ಕಾಮಗಾರಿ ಪ್ರಗತಿಯಲ್ಲಿದೆ.<br>4. ಕಾಡಾನೆ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು 2019-20ನೇ ಸಾಲಿನಲ್ಲಿ 13.42 ಕಿ.ಮೀ. ರೈಲ್ವೆ ಹಳಿಗಳ ಬ್ಯಾರಿಕೇಡ್ ನಿರ್ಮಾಣ ಮಾಡಲು ಉದ್ದೇಶಿಸಿದ್ದು, ಕಾಮಗಾರಿ ಪ್ರಗತಿಯಲ್ಲಿದೆ.<br>5. ಕೊಡಗು ಜಿಲ್ಲೆಯ ಅರಣ್ಯ ವೃತ್ತದ ವ್ಯಾಪ್ತಿಯ ವಲಯಗಳಲ್ಲಿ ಕಾಡಾನೆ ಹಾವಳಿಯನ್ನು ತುರ್ತು ನಿರ್ವಹಣೆ Rapid Response Team (ಆರ್.ಆರ್.ಟಿ) 22 ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸಲಾಗುತ್ತಿದೆ.<br>6. ಆಯ್ದ ವಲಯಗಳಲ್ಲಿ 21 ಕಾಡಾನೆಗಳನ್ನು ಮರಳಿ ಕಾಡಿಗೆ ಓಡಿಸಲು ತಂಡ ರಚನೆ ಮಾಡಲಾಗಿರುತ್ತದೆ.<br>7. ಕಾಡಾನೆ ಇರುವಿಕೆ ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ ಮತ್ತು ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯನಿರ್ವಹಿಸುತ್ತಿದೆ.<br>8. ವನ್ಯಪ್ರಾಣಿಗಳ ದಾಳಿಯಿಂದ ಭಾದಿತ ಗ್ರಾಮಗಳ ಜನರೊಂದಿಗೆ ಸಂಪರ್ಕ ಸಭೆಯನ್ನು ನಡೆಸಲಾಗುತ್ತಿದೆ.<br>9. ಕೊಡಗು ಜಿಲ್ಲೆಯಲ್ಲಿ 2014 ರಿಂದ ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಹನ್ನೊಂದು (11) ಕಾಡಾನೆಗಳನ್ನು ಸೆರೆಹಿಡಿದು ಸ್ಥಳಾಂತರ ಮಾಡಲಾಗಿರುತ್ತದೆ.<br>10. ಕೊಡಗು ಜಿಲ್ಲೆಯಲ್ಲಿ ಒಂಭತ್ತು (9) ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ ಅವುಗಳ ಚಲನವಲನಗಳ ಬಗ್ಗೆ ನಿಗಾವಹಿಸಲಾಗುತ್ತಿದೆ.<br>11. ಕೊಡಗು ಜಿಲ್ಲೆಯ ನಾಗರಹೊಳೆ ವ್ಯಾಪ್ತಿಯಲ್ಲಿ ರಕ್ಷಣಾ ಕೆಲಸಗಳಿಗಾಗಿ ಎಸ್.ಟಿ.ಪಿ.ಎಫ್ ತಂಡ ನೇಮಕ ಮಾಡಿ ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ. |

....3

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | ಸರ್ಕಾರದ ಆದೇಶ ಸಂಖ್ಯೆ ಅಪಜೀ-31-ಎಫ್.ಪಿಸಿ-2016, ದಿನಾಂಕ 07-08-2017ರನ್ವಯ ಕೊಡಗು ಜಿಲ್ಲೆಯಲ್ಲಿ ಮಾನವ-ವನ್ಯಜೀವಿ ಸಂಘರ್ಷದಿಂದ ಭಾದಿತರಾದ ವ್ಯಕ್ತಿಗಳಿಗೆ ಸಾಮಾಜಿಕ ಮತ್ತು ಆರ್ಥಿಕ ಬೆಂಬಲ ನೀಡುವುದರ ಜೊತೆಗೆ ಸದರಿ ಉದ್ದೇಶವನ್ನು ಈಡೇರಿಸಲು ಅಗತ್ಯವಿರುವ ಮೂಲ ಸೌಕರ್ಯಗಳನ್ನು ಒದಗಿಸುವ ಉದ್ದೇಶದಿಂದ "ಕೊಡಗು ಮಾನವ-ವನ್ಯಪ್ರಾಣಿ ಸಂಘರ್ಷ ಉಪಶಮನ ಪ್ರತಿಷ್ಠಾನ" ವನ್ನು ವೃತ್ತ ಮಟ್ಟದಲ್ಲಿ ಸ್ಥಾಪಿಸಲಾಗಿದೆ. |

ಸಂಖ್ಯೆ: ಅಪಜೀ 185 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:- 866 (846)

ಅನುಬಂಧ -4

## ಕೊಡಗು ವೃತ್ತದ ವ್ಯಾಪ್ತಿಯಲ್ಲಿ ಕಳೆದ 4 ವರ್ಷಗಳಲ್ಲಿ ಕಾಡಾನೆಗಳನ್ನು ಹಿಡಿದಿರುವ ವಿವರ

| ವರ್ಷ | ವಿಭಾಗ | ಸೆರೆ ಹಿಡಿಯಲಾದ ದಿನಾಂಕ | ಕಾಡಾನೆಗಳ ಸಂಖ್ಯೆ | ಸ್ಥಳಾಂತರಿಸಲಾದ ಸ್ಥಳ |
|---|---|---|---|---|
| 2018-19 | ಮಡಿಕೇರಿ ವಿಭಾಗ : ಕುಶಾಲನಗರ ವಲಯ | 15.05.2018 | 1 ಗಂಡು ಕಾಡಾನೆ | ದುಬಾರೆ ಆನೆ ಶಿಬಿರಕ್ಕೆ ಸ್ಥಳಾಂತರಿಸಲಾಗಿದೆ. |
| | ವಿರಾಜಪೇಟೆ ವಿಭಾಗ : ವಿರಾಜಪೇಟೆ ವಲಯದ ಅಮ್ಮತ್ತಿ ವಲಯದ ಕರಡಿಗೋಡು | 13.07.2018 | 1 ಗಂಡು ಕಾಡಾನೆ | ಮತ್ತಿಗೋಡು ಸಾಕಾನೆ ಶಿಬಿರಕ್ಕೆ ಸಾಗಿಸಲಾಗಿದೆ. |
| | ವಿರಾಜಪೇಟೆ ವಿಭಾಗ : ವಿರಾಜಪೇಟೆ ವಲಯದ ಸಿದ್ಧಾಪುರ ವ್ಯಾಪ್ತಿಯ ಪುಲಿಯೇರಿ | 10.09.2018 | 1 ಹೆಣ್ಣು ಕಾಡಾನೆ | ಮತ್ತಿಗೋಡು ಸಾಕಾನೆ ಶಿಬಿರಕ್ಕೆ ಸಾಗಿಸಲಾಗಿದೆ |
| | | **ಒಟ್ಟು** | **03** | |
| 2019-20 | ಮಡಿಕೇರಿ ವನ್ಯಜೀವಿ ವಿಭಾಗ, ಶ್ರೀಮಂಗಲ ವನ್ಯಜೀವಿ | 04.12.2019 | 1 ಗಂಡು ಕಾಡಾನೆ | ದುಬಾರೆ ಆನೆ ಶಿಬಿರಕ್ಕೆ ಸ್ಥಳಾಂತರಿಸಲಾಗಿದೆ. |
| | ಮಡಿಕೇರಿ ಪ್ರಾದೇಶಿಕ ವಿಭಾಗ, ಕುಶಾಲನಗರ | 28.05.2019 | 1 ಹೆಣ್ಣು ಕಾಡಾನೆ | ನಾಗರಹೊಳೆ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯ ಕಾಕನಕೋಟೆ ಮೀಸಲು ಅರಣ್ಯ ಪ್ರದೇಶಕ್ಕೆ |
| | ಮಡಿಕೇರಿ ಪ್ರಾದೇಶಿಕ ವಿಭಾಗ, ಕುಶಾಲನಗರ (ನಂಜರಾಯಪಟ್ಟಣ) | 01.06.2019 | 1 ಗಂಡು ಕಾಡಾನೆ | ದುಬಾರೆ ಸಾಕಾನೆ ಶಿಬಿರ |
| | | **ಒಟ್ಟು** | **03** | |
| 2020-21 | ತಿತಿಮತಿ ವಲಯದ ಹೆಬ್ಬಾಲೆ ಗ್ರಾಮದಲ್ಲಿ | 04.10.2020 | 1 ಗಂಡು ಕಾಡಾನೆ | ಬಂಡೀಪುರದ ಮೂಲೆ ಹೊಳೆ ಪ್ರದೇಶಕ್ಕೆ |
| | | **ಒಟ್ಟು** | **01** | |
| 2021-22 | ವಿರಾಜಪೇಟೆ ವಲಯದ ಅಮ್ಮತ್ತಿ ಹೋಬಳಿಯ ಹೊಸಕೋಟೆ ಗ್ರಾಮ | 10.04.2021 | 1 ಗಂಡು ಕಾಡಾನೆ | ಬಂಡೀಪುರದ ಹುಲಿ ಸಂರಕ್ಷಿತ ಪ್ರದೇಶಕ್ಕೆ |
| | | **ಒಟ್ಟು** | **01** | |
| | | **ವೃತ್ತದಲ್ಲಿ ಒಟ್ಟು ಸೆರೆ ಹಿಡಿಯಲಾದ ಆನೆಗಳ ಸಂಖ್ಯೆ** | **08** | |